## ಕರ್ನಾಟಕ ವಿಧಾನ ಪರಿಷತ್ತು

1. ಸದಸ್ಯರ ಹೆಸರು : ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1336
3. ಉತ್ತರಿಸಬೇಕಾದ ದಿನಾಂಕ : 24-12-2021
4. ಉತ್ತರಿಸುವವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018-19ನೇ ಸಾಲಿನಲ್ಲಿ ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಬಿಸ್ಕೂರು ಗ್ರಾಮದ ಮುಸ್ಲಿಂ ಜನಾಂಗದ ಸ್ಮಶಾನದ ಹತ್ತಿರದಿಂದ ಗುಬ್ಬಿ ಚಿಕ್ಕಯ್ಯನಕಟ್ಟೆ ಹತ್ತಿರದವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿಯು ನಡೆದಿದ್ದು, (ಸಂಖ್ಯೆ: 92195794) ಈ ಕಾಮಗಾರಿಯನ್ನು ನಿರ್ವಹಿಸುವಾಗ ರಾಜಕಾಲುವೆಯನ್ನು ಮುಚ್ಚಿ ಕಾಮಗಾರಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ ಆದಾಗ್ಯೂ ಪರಿಶೀಲಿಸಲಾಗಿ-ಸದರಿ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಮಹಾತ್ಮಗಾಂಧಿ ನರೇಗಾ ಯೋಜನೆಯಡಿ ನಿರ್ವಹಿಸಿದ್ದು, ಗ್ರಾಮಸ್ಥರ ಬೇಡಿಕೆ ಹಾಗೂ ಮಹಜರ್‌ನಂತೆ ರಾಜಕಾಲುವೆ ಪಕ್ಕದಲ್ಲಿರುವ ಹಾಲಿ ಅಸ್ತಿತ್ವದಲ್ಲಿರುವ ಸುಮಾರು ವರ್ಷಗಳಿಂದ ಇರುವ ಕಾಲು ದಾರಿಯನ್ನು ಅಭಿವೃದ್ಧಿಪಡಿಸಲಾಗಿರುತ್ತದೆ. ರಾಜಕಾಲುವೆಯನ್ನು ಮುಚ್ಚಿ ಕಾಮಗಾರಿಯನ್ನು ನಿರ್ವಹಿಸಿರುವುದಿಲ್ಲ. |
| ಆ) | ಸದರಿ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಬಸವನಗುಡಿಪಾಳ್ಯ ಗ್ರಾಮದ ಕೆರೆ ಅಭಿವೃದ್ಧಿ ಮುಂದುವರೆದ ಕಾಮಗಾರಿ (ಸಂಖ್ಯೆ: 92316279) ನಡೆದಿದ್ದು, ಈ ಕಾಮಗಾರಿಯು ಕಳಪೆ ಕಾಮಗಾರಿಯಾಗಿದ್ದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ ಆದಾಗ್ಯೂ ಪರಿಶೀಲಿಸಲಾಗಿ-ಸದರಿ ಹೆಚ್ಚುವರಿ ಕಾಮಗಾರಿಗೆ ರೂ.5.00 ಲಕ್ಷಗಳಿಗೆ ಹೆಚ್ಚುವರಿ ಕ್ರಿಯಾ ಯೋಜನೆ ಅನುಮೋದನೆಯಾಗಿದ್ದು, ಅದರಲ್ಲಿ ರೂ.2.10 ಲಕ್ಷಗಳು ಹೂಳೆತ್ತುವ ಹಾಗೂ ಕರೆ ಏರಿ ಮೇಲೆ ಜೆಲ್ಲಿ ರಸ್ತೆ ಅಭಿವೃದ್ಧಿಗೆ ಪಾವತಿಸಲಾಗಿರುತ್ತದೆ. ಸದರಿ ಕಾಮಗಾರಿಯ ಕೆರೆ ಏರಿ ಪಿಚ್ಚಿಂಗ್ ಕಾಮಗಾರಿ ಸಂಬಂಧಪಟ್ಟಂತೆ ಕಾಮಗಾರಿಯು ತೃಪ್ತಿಕರವಾಗಿಲ್ಲದಿರುವುದರಿಂದ ಬಾಕಿ ಮೊತ್ತವನ್ನು ಪಾವತಿಸಿರುವುದಿಲ್ಲ. |
| ಇ) | ಬಂದಿದ್ದಲ್ಲಿ, ಮೇಲ್ಕಂಡ ಕಾಮಗಾರಿಗಳನ್ನು ನಿರ್ವಹಿಸಿರುವವರ ವಿರುದ್ಧ ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಮೇಲ್ಕಂಡ ಕಾಮಗಾರಿಗಳನ್ನು ನಿಯಮಾನುಸಾರ ಪರಿಶೀಲಿಸಿ ವರದಿ ನೀಡಲು ಒಂಬುಡ್ಸ್‌ಮನ್ ರವರಿಗೆ ಆದೇಶಿಸಲಾಗಿದೆ. |

ಗ್ರಾಅಪ 82(33) ಉಖಾಯೋ 2021

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ